ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಯಾರು ಹೆಚ್ಚು ಅದೃಷ್ಟವಂತರು



ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಅಂಬಿಕ ಆರ್

# ಯಾರು ಹೆಚ್ಚು ಅದೃಷ್ಟವಂತರು

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಅಂಬಿಕ ಆರ್

Vidya Online
A PARTNERSHIP FOR TEACHERS, CHILDREN AND EDUCATION

ಈ ಕಥೆ, ದಕ್ಷಿಣ ದೆಹಲಿಯ ದಿಂಡು ಕಾಡಿನ ಭಾಗವಾಗಿರುವ ಸಂಜಯ ವನ ಮತ್ತು ಅದರ ಆಸುಪಾಸಿನಲ್ಲಿರುವ ಸಂಸ್ಥೆಗಳ ಆವರಣಗಳಲ್ಲಿ 2010ರ ಏಪ್ರಿಲ್ ಮತ್ತು ಜೂಲೈ ತಿಂಗಳುಗಳ ನಡುವೆ ನಡೆಸಿದ ಅವಲೋಕನೆಗಳನ್ನು ಆಧರಿಸಿದೆ.

ಈ ಪುಸ್ತಕದಲ್ಲಿ ಇರುವ ಚಿತ್ರಗಳು, ಪಕ್ಷಿಯ ಅಥವ ಗೂಡುಗಳ ನಿಜವಾದ ಗಾತ್ರವನ್ನು ತೋರಿಸದೇ ಇರಬಹುದು.






http://vidyaonline.net

“ನೀವು ಎಷ್ಟು ಅದೃಷ್ಟವಂತರು!” ಹಿಪ್ಪುನೇರಳೆ ಮರದ ಮೇಲೆ ಕುಳಿತಿದ್ದ ಕೆಂಪು ಕಿಬ್ಬೊಟ್ಟೆಯ ಪಿಕಳಾರದ ಜೋಡಿಯನ್ನು ನೋಡಿ ನಾನು ಹೇಳಿದೆ.

“ಯಾವ ರೀತಿಯಲ್ಲಿ?” ತಾಯಿ ಪಿಕಳಾರ ಕೇಳಿತು.

“ನಿಮ್ಮ ಮೊಟ್ಟೆಗಳು ಒಡೆದು ಮರಿಬಂದಿವೆ, ಅವರದ್ದು ಹಾಗೆ ಇದೆ.”

“ಯಾರದು?” ಪಿಕಳಾರ ಕೇಳಿತು.





ಕೆಂಪು ಟಿಟ್ಟಿಭ ಹಕ್ಕಿಯದು ನಾನು ಉತ್ತರಿಸಿದೆ.

“ಏನಾಯ್ತು ಅವು ಮೊಟ್ಟೆಗಳನ್ನು ಬಿಟ್ಟು ಹೋದವೇ?” ಹಕ್ಕಿ ಕೇಳಿತು.

“ಇಲ್ಲ ... ಹಾಗೆ ಮಾಡಿಲ್ಲ,” ಪಿಕಳಾರ ಹಕ್ಕಿಗೆ ನಾನು ಕೆಂಪು ಟಿಟ್ಟಿಭದ ಗೂಡನ್ನು ನೋಡಿದ್ದು, ಮತ್ತೆ ಅವು ಮೊಟ್ಟೆಗಳಿಗೆ ನಿಯಮಿತವಾಗಿ ಕಾವು ಕೊಡುತ್ತಿದ್ದನ್ನು ಗಮನಿಸಿದ್ದನ್ನು ಹೇಳಿದೆ. ಒಂದು ಹಕ್ಕಿ ಮೊಟ್ಟೆಗೆ ಕಾವು ಕೊಡುತ್ತಿದ್ದರೆ ಇನ್ನೊಂದು ಪಕ್ಕದಲ್ಲಿ ಕಾಯುತ್ತಿರುತ್ತಿತ್ತು. ಯಾವುದಾದರೂ ನಾಯಿ ಅಥವಾ ಮನುಷ್ಯರು ಹತ್ತಿರ ಬಂದರೆ ಕುಳಿತಿದ್ದ ಹಕ್ಕಿ ಮೆಲ್ಲನೆ ಎದ್ದು ಅಲ್ಲಿಂದ ಹೊರಟು ಹೋಗುತ್ತಿತ್ತು. ಆಗ ಆ

ಮೊಟ್ಟೆಗಳು ಯಾರ ಗಮನಕ್ಕೂ ಬರುತ್ತಿರಲಿಲ್ಲ. ಆ ಎರಡು ಟಿಟ್ಟಿಭ ಹಕ್ಕಿಗಳು ಯಾವಾಗಲೂ ಮೊಟ್ಟೆಯ ಸಮೀಪದಲ್ಲೇ ಇರುತ್ತಿದ್ದವು, ಎಂದು ವಿವರಿಸಿದೆ.

"ಹಾಗಾದರೆ ಆ ಮೊಟ್ಟೆಯಿಂದ ಮರಿಗಳು ಬಂದೇ ಬರುತ್ತವೆ," ಎಂದು ಹೇಳುತ್ತಾ ತನ್ನ ಮರಿಗಳಿಗಾಗಿ ಆಹಾರ ಹುಡುಕಲು ಹಾರಿಹೋಯಿತು ಪಿಕಳಾರ.

ಚಿಕ್ಕದಾದ ಆದರೆ ಸುಂದರವಾದ ಗೂಡಿನಲ್ಲಿ ತಾಯಿ ಪಿಕಳಾರ ಮೂರು ಮೊಟ್ಟೆಗಳನ್ನು ಇಟ್ಟಿತ್ತು. ಅರ್ಧ ಚಂದ್ರಾಕಾರದ ಬಟ್ಟಲಿನಂತಿರುವ





ತೆಳುವಾದ ಕಡ್ಡಿಗಳಿಂದ ಮಾಡಿದ ಅಚ್ಚುಕಟ್ಟಾದ ಗೂಡು. ನನ್ನ ಬೊಗಸೆಯಲ್ಲಿ ಹಿಡಿಯಬಹುದಾದಷ್ಟು ಸಣ್ಣದು. ಟಿಟ್ಟಿಭದ ಮೊಟ್ಟೆಗಳಂತೆ ಈ ಮೊಟ್ಟೆಗಳ ಮೇಲೂ ಕಲೆಗಳು, ಚುಕ್ಕಿಗಳು ಇದ್ದವು. ಮೊಟ್ಟೆ ತಿಳಿ ಗುಲಾಬಿ ಬಣ್ಣದಲ್ಲಿದ್ದು ಚುಕ್ಕಿಗಳು ಕಂದು ಮತ್ತು ನೇರಳೆ ಬಣ್ಣದಲ್ಲಿತ್ತು. ಆದರೆ ಟಿಟ್ಟಿಭದ ಮೊಟ್ಟೆಗಳು ದೊಡ್ಡದಾಗಿದ್ದರೆ, ಇವು ಚಿಕ್ಕದಾಗಿ ಅಂಡಾಕಾರದಲ್ಲಿದ್ದವು.

ಪಿಕಳಾರ ಹಕ್ಕಿಯ ಬರುವಿಗಾಗಿ ಕಾಯುತ್ತಿದ್ದ ನಾನು ಅದು ಬಂದ ಕೂಡಲೇ ನನ್ನ ಮಾತನ್ನು ಮುಂದುವರಿಸಿದೆ. “ನಿಮ್ಮ ಮೊಟ್ಟೆ ಎರಡೇ ವಾರಗಳಲ್ಲಿ ಮರಿಯಾಯ್ತು. ಟಿಟ್ಟಿಭದ ಮೊಟ್ಟೆಗಳು ನಿಮ್ಮ ಮೊಟ್ಟೆಗಿಂತ

ದೊಡ್ಡದಾಗಿದೆ. ದೊಡ್ಡ ಮೊಟ್ಟೆಯಿಂದ ಮರಿ ಬರಲು ಹೆಚ್ಚು ಸಮಯ ಬೇಕಾಗಬಹುದೋ ಏನೋ ನನಗೆ ಗೊತ್ತಿಲ್ಲ. ನಾನು ದಿನಗಳನ್ನು ಎಣಿಸುತ್ತಿದ್ದೇನೆ. ಈಗಾಗಲೇ ಒಂದು ತಿಂಗಳಾಗಿದೆ. ಮೊಟ್ಟೆ ಒಡೆಯಲು ಅಷ್ಟು ಸಮಯ ಹೆಚ್ಚೇ ಆಯಿತು ಅಲ್ಲವೇ?”

“ನೀನು ಮೊಟ್ಟೆಗಳನ್ನು ಕೊನೆಯ ಬಾರಿ ಯಾವಾಗ ನೋಡಿದೆ?” ಪಿಕಳಾರ ಕೇಳಿತು.

“ಎರಡು ದಿನಗಳ ಹಿಂದೆ. ಎಷ್ಟು ದಿನ ನೋಡುವುದು? ಅ ಮೊಟ್ಟೆಗಳು ಮರಿ ಆಗುವುದಿಲ್ಲ,”ಎಂದೆ.





“ಮೊಟ್ಟೆ ಮರಿಯಾಗುವ ಸಮಯಕ್ಕೆ ಸರಿಯಾಗಿ ನೀನು ಕೈ ಬಿಟ್ಟಿದ್ದೀಯ. ಮತ್ತೊಮ್ಮೆ ಹೋಗಿ ನೋಡು. ನಿನ್ನ ದುರ್ಬೀನು ತೆಗೆದುಕೊಂಡು ಹೋಗಲು ಮರೆಯಬೇಡ,” ಪಿಕಳಾರ ಹಕ್ಕಿ ಎಚ್ಚರಿಸಿತು.

“ಸರಿ,” ನಾನು ಅರ್ಧ ಮನಸ್ಸಿನಿಂದ ಹೇಳಿದೆ. ದುರ್ಬೀನು ಯಾವ ರೀತಿ ಸಹಾಯ ಮಾಡುತ್ತದೆ ಎಂದು ಯೋಚಿಸಿದೆ.

ಟಿಟ್ಟಿಭಗಳು ನೆಲದ ಮೇಲೆ ಗೂಡು ಕಟ್ಟುತ್ತವೆ. ನೆಲವನ್ನು ಕೆದರಿ, ಸುತ್ತಲು ಕಲ್ಲುಗಳು, ಮಣ್ಣಿನ ಹೆಂಟೆಗಳು, ಕಡ್ಡಿಗಳನ್ನೆಲ್ಲ ಮನಬಂದಂತೆ ಜೋಡಿಸಿ, ಅದರಲ್ಲಿ ಮೊಟ್ಟೆಗಳನ್ನು ಇಡುತ್ತವೆ. ಸುತ್ತ ಇರುವ

ಕಲ್ಲಿನಂತೆಯೇ ಕಾಣುವ ಆ ಮೊಟ್ಟೆಗಳು ಯಾರ ಕಣ್ಣಿಗೂ ಕಾಣದಂತೆ ಮರೆಯಾಗಿರುತ್ತದೆ, ಯಾರಾದರೂ ಅವುಗಳನ್ನು ದುರ್ಬೀನನಿಂದ ಅಥವಾ ಅದಿಲ್ಲದೆ ನೋಡುವುದು ಅದೃಷ್ಟವೇ ಸರಿ. ಪಿಕಳಾರ ಹಕ್ಕಿಯ ಆದೇಶದಂತೆ ನಾನು ಕೊಳದ ದಡದಲಿದ್ದ ಆ ಗೂಡಿನ ಬಳಿಗೆ ಹೋದೆ. "ಮೊಟ್ಟೆಗಳು ಕಾಣೆಯಾಗಿವೆ! ಒಂದೂ ಇಲ್ಲ! ಯಾರೋ ಅವುಗಳನ್ನು ತೆಗೆದುಕೊಂಡಿದ್ದಾರೆ ಅಥವಾ ತಿಂದು ಬಿಟ್ಟಿದ್ದಾರೆ. ಇಲ್ಲಿ ಮೊಟ್ಟೆಗಳ ಕುರುಹು ಸಹ ಇಲ್ಲ," ಒಂದೇ ಉಸಿರಿನಲ್ಲಿ ಕೂಗಿದೆ.

"ಏನಿದು ಇಷ್ಟೊಂದು ಗಲಾಟೆ?" ಬೇಗ ಬೇಗ ಈಜಿಕೊಂಡು ಬರುತ್ತಿದ್ದ ಬಾತು ಕೋಳಿಯಂತಿದ್ದ ಹಕ್ಕಿ ಕೋಪದಿಂದ ಕೇಳಿತು.





“ಮೊಟ್ಟೆಗಳು ಕಾಣೆಯಾಗಿವೆ! ತುಂಬಾ ದಿನಗಳಿಂದ ಇಲ್ಲೇ ಇದ್ದವು. ಈಗ ಇಲ್ಲಿ ಒಂದೂ ಇಲ್ಲ. ಮರಿ ಆಗುವುದಿಲ್ಲಾ ಅಂದುಕೊಂಡಿದ್ದೆ.”

“ಮೊಟ್ಟೆ ಯಾಕೆ ಮರಿಯಾಗುವುದಿಲ್ಲ?” ಆ ಹಕ್ಕಿ ಕೇಳಿತು.

“ನಾನು... ಪಿಕಳಾರದದ...” ನನ್ನ ಮಾತನ್ನು ಮುಂದುವರಿಸದೆ ಬೆರಗಾಗಿ ಬಾಯಿಬಿಟ್ಟುಕೊಂಡು ನಿಂತು ಬಿಟ್ಟೆ. ನಾನು ಆ ಹಕ್ಕಿಯ ಕಡೆ ಅಷ್ಟು ಗಮನ ಕೊಟ್ಟಿರಲಿಲ್ಲ. ಆದರೆ ಅದನ್ನು ಈಗ ಸರಿಯಾಗಿ ಗಮನಿಸಿದಾಗ ಆಶ್ಚರ್ಯಗೊಂಡು ಕೇಳಿದೆ, “ನಿನ್ನ ಬೆನ್ನಿನ ಮೇಲಿರುವುದು ಯಾರು? ನಿನ್ನ ಮರಿಗಳೇ?”

“ಹೌದು ಮತ್ತಿನ್ನೇನು? ನನ್ನ ಮೇಲೆ ಎರಡು ಮರಿಗಳು ಸವಾರಿ ಮಾಡುತ್ತಿವೆ. ಈ ಕಡೆ ಇರುವುದು ಇವತ್ತೇ ಮೊಟ್ಟೆಯಿಂದ ಹೊರಗೆ ಬಂತು.”

“ಇವತ್ತಾ?”

“ನೀನು ಮತ್ತೆ ಕೂಗುತ್ತಿರುವೆ,” ಆ ಹಕ್ಕಿ ಗದರಿಸಿತು.

“ನಿನ್ನ ಮರಿಗಳಿಗೆ ಒಂದೇ ದಿನ ಆಗಿರುವುದೇ? ಅವು ಕಣ್ಣು ಬಿಟ್ಟಿವೆ ಗರಿಗಳು ಸಹ ಬಂದಿವೆ!” ನಾನು ಪಿಕಳಾರದ ಒಂದು ದಿನದ ಮರಿಗಳ





ಬಗ್ಗೆ ವಿವರಿಸಿದೆ. ಅವಕ್ಕೆ ರೆಕ್ಕೆಗಳೇ ಇರಲಿಲ್ಲ ಮತ್ತು ಅವು ಮಾಂಸದ ಮುದ್ದೆಗಳಂತೆ ಇದ್ದವು. ಅವುಗಳ ಕಣ್ಣು ಒಂದು ಉಬ್ಬಿನಂತೆ ಮಾತ್ರ ಕಾಣುತ್ತಿದ್ದು. ಅವಿನ್ನು ಸರಿಯಾಗಿ ಬೆಳೆದಿರಲಿಲ್ಲ. ಅಗಲವಾಗಿ ಬಾಯಿ ಬಿಡಲು ಅಥವಾ ಮೆಲ್ಲನೆ ಕೂಗುವುದು ಹೊರತು ಇನ್ನೇನು ಮಾಡಲಾರವು.

"ಓ... ನಿನ್ನ ಅನುಮಾನ ಏನೆಂದು ಈಗ ತಿಳಿಯಿತು. ಎಲ್ಲಾ ಪಕ್ಷಿ ಮರಿಗಳು ಪಿಕಳಾರದ ಮರಿಯಂತೆ ಇರುತ್ತದೆ ಎಂದು ನೀನು ನಿರೀಕ್ಷಿಸಬಾರದು. ಟಿಟ್ಟಿಭದ ಮರಿಯ ಕಣ್ಣುಗಳು ಹುಟ್ಟಿದ ಕೂಡಲೇ ತೆರೆಯುತ್ತವೆ. ಆಹಾರ ಹುಡುಕಿ ಸ್ವತಃ ತಿನ್ನುತ್ತವೆ.

ನನ್ನ ಮರಿಗಳ ಕಣ್ಣುಗಳು ಹುಟ್ಟಿದ ಕೂಡಲೇ ತೆರೆದರೂ, ಸ್ವತಃ ತಿನ್ನಲು ಕೆಲವು ದಿನಗಳಾದರೂ ಬೇಕು," ಎಂದು ಹೇಳಿ ತನ್ನ ರೆಕ್ಕೆಯ ಕೆಳಗೆ ಎರಡು ಮರಿಗಳನ್ನು ಸೇರಿಸಿಕೊಂಡು ಈಜುತ್ತಾ ಹೊರಟು ಹೋಯಿತು.

ಆ ಹಕ್ಕಿ ಹೋದನಂತರ ಅಲ್ಲೇ ಕುಳಿತು ಹಕ್ಕಿಯ ಕುಟುಂಬವನ್ನು ನೋಡತೊಡಗಿದೆ. ಹಕ್ಕಿಯು ಮುಂದುವರಿಯುತ್ತಿದ್ದಾಗ ಮರಿಗಳು ಆಗಾಗ ತಾಯಿಯ ಬೆನ್ನಿನ ಮೇಲಿಂದ ಜಾರಿ ಅದರೊಂದಿಗೆ ಈಜುತ್ತಿದ್ದವು. ಚಿಕ್ಕದಾದರೂ ಎಷ್ಟು ವೇಗವಾಗಿ ಈಜುತ್ತವೆ! ದುರ್ಬೀನು ಈಗ ಉಪಯೋಗಕ್ಕೆ ಬಂತು. ತಾಯಿಗೆ ಮಧ್ಯದಲ್ಲಿ ಏನಾದರೂ ಆಹಾರ





ಸಿಕ್ಕರೆ, ತಿರುಗಿ ಅದನ್ನು ಮರಿಗಳಿಗೆ ತಿನ್ನಿಸುತ್ತಿತ್ತು. ಕೆಲವೊಮ್ಮೆ ಇನ್ನೊಂದು ದೊಡ್ಡ ಹಕ್ಕಿ, ತಂದೆ ಇರಬಹುದು, ಬಂದು ಮರಿಗಳಿಗೆ ಆಹಾರ ಕೊಡುತ್ತಿತ್ತು. ಸ್ವಲ್ಪ ದೊಡ್ಡದಾಗಿದ್ದ ಮರಿಗಳು ತಾವೇ ಈಜುತ್ತಾ ಆಹಾರ ಹುಡುಕುತ್ತಿದ್ದವು.

ಇಂಥಹ ಎಷ್ಟೊಂದು ಪಕ್ಷಿಗಳಿವೆ? ಕೊಳದ ತುಂಬಾ ಇವೇ ಕಾಣುತ್ತಿವೆಯಲ್ಲಾ. ಈ ಪಕ್ಷಿಯ ಹೆಸರೇನೋ? ಎಂದುಕೊಳ್ಳುತ್ತಾ ದುರ್ಬೀನಿಂದ ಕೊಳದ ಸುತ್ತ ಕಣ್ಣು ಹಾಯಿಸಿದೆ.

“ಆಹಾ ಟಿಟ್ಟಿಭ!” ನನಗೆ ಕೂಗದೆಯಿರಲು ಆಗಲೇ ಇಲ್ಲ.

ಕೊಳದ ದೂರದ ದಡದಲ್ಲಿ ಹುಲ್ಲಿನ ಮೇಲೆ ಟಿಟ್ಟಿಭ ಕಾವು ಕೊಡುವಾಗ ಕುಳಿತುಕೊಳ್ಳುವಂತೆ ಕುಳಿತಿತ್ತು. ಅದರ ಕೊಕ್ಕು ಅರ್ಧ ತೆಗೆದಿದ್ದು ಜೋರಾಗಿ ಉಸಿರಾಡುತ್ತಿತ್ತು. ಹಕ್ಕಿಯು ಅತಿ ಎಚ್ಚರಿಕೆಯಿಂದ ಕುಳಿತಿತ್ತು.

ಇನ್ನೊಂದು ಗೂಡು ಇನ್ನೊಂದು ಅನ್ವೇಷಣೆ!

ನನಗೆ ರೋಮಾಂಚನವಾಯಿತು. ಒಂದು ಚಿಕ್ಕಮರಿ ತಾಯಿ ಟಿಟ್ಟಿಭದ ಬಳಿಗೆ ಹೋಗಿ ಅದರ ರೆಕ್ಕೆಯ ಕೆಳಗೆ ಅಡಗಿಕೊಂಡಿತು. ಅದು ಅದರದ್ದೇ ಮರಿಯಾ? ಆಶ್ಚರ್ಯವೂ ಆಯಿತು. ಸ್ವಲ್ಪ ಸಮಯದ ನಂತರ ತಾಯಿ ಎದ್ದು ಹೋಯಿತು. ಮರಿ ಅದನ್ನೇ ಆತ್ಮವಿಶ್ವಾಸದಿಂದ ಹಿಂಬಾಲಿಸಿತು.





ನನ್ನ ತಲೆಯು ಪ್ರಶ್ನೆಗಳಿಂದ ತುಂಬಿಹೋಗಿತ್ತು. ಯಾರನ್ನು ಕೇಳಲಿ?

ಸುತ್ತಲೂ ನೋಡಿ, ಈಜಿಹೋಗುತ್ತಿದ್ದ ಆ ಹಕ್ಕಿಯನ್ನು ಕರೆದೆ: "ನಿನ್ನ ಹೆಸರೇನು? ಒಂದು ನಿಮಿಷ ಇಲ್ಲಿ ಬರುತ್ತೀಯಾ?"

"ಗುಳುಮುಳುಕ. ಏನು ಬೇಕು ನಿನಗೆ?" ಆ ಹಕ್ಕಿ ಹತ್ತಿರ ಬರುತ್ತಾ ಕೇಳಿತು. ಈ ಬಾರಿ ಅದರ ಮರಿಗಳು ಇರಲಿಲ್ಲ.

"ಅಲ್ಲಿರುವುದು ಟಿಟ್ಟಿಭದ ಮರಿಯಾ?" ಕೊಳದ ಆಚೆ ತೋರಿಸುತ್ತಾ ನಾನು ಮೆಲು ದನಿಯಲ್ಲಿ ಕೇಳಿದೆ.

“ಹೌದು...” ನನ್ನಂತೆ ಮೆಲು ದನಿಯಲ್ಲಿ ಹೇಳುತ್ತಾ ಮುಂದುವರಿಸಿತು, “ಒಂದು ಮೊಟ್ಟೆ ನೆನ್ನೆ ಮರಿಯಾಯಿತು. ಉಳಿದ ಮೊಟ್ಟೆಗಳು ಇವತ್ತು ಮರಿ ಆಗಬಹುದು. ಮರಿಗಳು ಒಣಗಿ, ನಿಂತು ನಡೆಯಲು ಶಕ್ತಿ ಪಡೆದಾಗ ಅದರ ತಂದೆ ತಾಯಿ ಅವುಗಳನ್ನು ಗೂಡಿನಿಂದ ದೂರ ಆಹಾರ ಸಿಗುವ ಜಾಗಗಳಿಗೆ ಕರೆದುಕೊಂಡು ಹೋಗುತ್ತವೆ. ಮರಿ ಅಲ್ಲಿ ತಾನೇ ಆಹಾರ ಹುಡುಕಿ ತಿನ್ನುತ್ತದೆ.”

“ಹಾಗಾದರೆ ಈ ಗೂಡು ಖಾಲಿಯಾಗಿರುವುದು...” ನಾನು ಹೇಳುತ್ತಿರುವಂತೆ, “ಹೌದೌದು... ಈ ಗೂಡಿನಲ್ಲಿ ಇದ್ದ ಮೊಟ್ಟೆಗಳು ಕೆಲವು ದಿನದ ಹಿಂದೆ ಮರಿಗಳಾದವು. ಆ ಕಡೆ ನೋಡು, ಪೂರ್ತಿ





ಕುಟುಂಬ ಅಲ್ಲಿದೆ," ಎಂದು ತೋರಿಸಿತು.

ನಾನು ಗುಳುಮುಳುಕ ಹಕ್ಕಿ ತೋರಿಸಿದ ಕಡೆ ನೋಡುತ್ತಿದ್ದಾಗ ಅದು ಉತ್ಸಾಹದಿಂದ ಹೇಳಿತು, "ನೋಡು! ದುರ್ಬೀನು ಉಪಯೋಗಿಸು. ತಾಯಿ ಟಿಟ್ಟಿಭ ತನ್ನ ಮರಿಗಳನ್ನೆಲ್ಲ ರೆಕ್ಕೆಯಲ್ಲಿ ಸೇರಿಸಿಕೊಂಡಿದೆ."

"ಓಹೋ 10 ಕಾಲುಗಳ ಟಿಟ್ಟಿಭ!" ನಾನು ಜೋರಾಗಿ ನಗುತ್ತಾ ಕೂಗಿದೆ. ನಾನು ಈ ರೀತಿಯ ದೃಶ್ಯ ನೋಡೇ ಇರಲಿಲ್ಲ. ತಾಯಿ ಹಕ್ಕಿ ಅರ್ಧ ಕುಳಿತಿತ್ತು, ಅದರ ಹಳದಿ ಬಣ್ಣದ ಎರಡು ಕಾಲುಗಳು ಕಾಣುತ್ತಿದ್ದವು, ಮತ್ತೆ ನಾಲ್ಕು ಜೊತೆ ಬೂದು ಬಣ್ಣದ ಕಾಲುಗಳು ಹೊರಚಾಚಿದ್ದವು.

“ಹೀಗೆ ತನ್ನ ಮರಿಗಳನ್ನು ಮರೆಮಾಡುತ್ತದೆಯೇ?” ನಾನು ಕೇಳಿದೆ.

“ಇಲ್ಲ, ಹೀಗೆ ಮರಿಗಳನ್ನು ಬೆಚ್ಚಗಿಡುತ್ತದೆ.” ಇಷ್ಟು ಹೇಳಿ ಗುಳಮುಳುಕ ಹೊರಟಿತು.

ಈಜಿಕೊಂಡು ಹೋಗುತ್ತಾ ಹಿಂತಿರುಗಿ ಹೇಳಿತು, “ಟಿಟ್ಟಿಭದ ಮರಿಗಳು ಸುಲಭವಾಗಿ ಕಾಣುವುದೇ ಇಲ್ಲ. ಅವುಗಳ ಗರಿಯ ಬಣ್ಣವು ಅವುಗಳನ್ನು ಮರೆಮಾಚುತ್ತದೆ. ಅಲ್ಲದೆ ಒಂದು ಎಚ್ಚರಿಕೆಯ ಕರೆ ತಂದೆ ತಾಯಿಗಳಿಂದ ಬಂದರೆ ಸಾಕು ಅವೆಲ್ಲ ಅಲ್ಲಾಡದೆ ಕುಳಿತುಬಿಡುತ್ತವೆ. ಸರಿಯಾಗಿ ನೋಡು ಇಲ್ಲದಿದ್ದರೆ ಈ ದೃಶ್ಯಗಳನ್ನು ಕಳೆದುಕೊಳ್ಳುತ್ತೀಯ.”





ನಾನು ಹಿಂತಿರುಗಿ ಬಂದು ಪಿಕಳಾರಕ್ಕೆ ಹೇಳಿದೆ: “ನೀನೇನು ಅದೃಷ್ಟವಂತ ಅಲ್ಲ. ಟಿಟ್ಟಿಭಗಳು ನಿಮ್ಮ ಹಾಗೆ ಮರಿಗಳಿಗೆ ತಿನ್ನಿಸುತ್ತಾ ಆಯಾಸಗೊಳ್ಳುವುದಿಲ್ಲ.”

“ಆಹಾ!” ಪಿಕಳಾರ ಕೋಪದಿಂದ ಹೇಳಿತು, “ನಮ್ಮ ಮರಿಗಳನ್ನು ನಾವು ಸುಮಾರು ಎರಡು ವಾರಗಳು ನೋಡಿಕೊಳ್ಳಬೇಕು. ಅವು ಹಾರಲು ಪ್ರಾರಂಭಿಸಿದಾಗ ಸುರಕ್ಷಿತವಾಗಿರುತ್ತವೆ. ಟಿಟ್ಟಿಭದ ಮರಿಗಳು ಹಾರಲು ಕಲಿಯಲು ಅದಕ್ಕಿಂತ ತುಂಬಾ ಹೆಚ್ಚು ಸಮಯ ತೆಗೆದುಕೊಳ್ಳುತ್ತವೆ. ಅಲ್ಲಿಯವರೆಗೆ ಅವುಗಳ ತಂದೆ ತಾಯಿಯರಿಗೆ ರಾತ್ರಿ ನಿದ್ದೆ ಇಲ್ಲ, ಬೆಳಗಿನ ಹೊತ್ತು ನೆಮ್ಮದಿ ಇಲ್ಲ. ಮಾಂಸಾಹಾರಿ

ಹಕ್ಕಿಗಳು ಮತ್ತು ಪ್ರಾಣಿಗಳಿಂದ, ಅಥವಾ ತಿಳಿಯದೆ ಮರಿಗಳನ್ನು ತುಳಿದುಬಿಡುವ ಮನುಷ್ಯರಿಂದ ಅವುಗಳನ್ನು ಎಚ್ಚರಿಸುತ್ತಾ ಕಾಪಾಡುತ್ತಲೇ ಇರಬೇಕು.”

ಈ ವಿವರಣೆ ಕೇಳಿ ತಲೆ ಆಡಿಸುತ್ತಾ ಯೋಚಿಸಿದೆ: ಈಗ ಯಾರು ಹೆಚ್ಚು ಅದೃಷ್ಟವಂತರು? ಗೂಡಿನಲ್ಲಿ ಸುರಕ್ಷಿತವಾಗಿರುವ ಆದರೆ ಕಣ್ಣೇ ಬಿಡದ ಅಸಹಾಯಕ ಮರಿಗಳನ್ನು ಸಾಕುವುದು ಸುಲಭವೂ? ಅಥವಾ ತನ್ನ ಆಹಾರವನ್ನು ತಾನೇ ಹುಡುಕಿಕೊಳ್ಳಬಲ್ಲ ಚಿಕ್ಕಮರಿಗಳನ್ನು ಅಪಾಯದಿಂದ ಕಾಪಾಡುವುದು ಸುಲಭವೂ? ನಿರ್ಧರಿಸುವುದು ಹೇಗೆ?

***





ಮರಿಗಳನ್ನು ಭೇಟಿ ಮಾಡಿ



ಕೆಂಪು ಕಿಬ್ಬೊಟ್ಟೆಯ ಪಿಕಳಾರ ಮರಿಗಳು (Redvented Bulbul chicks); ದಿನ 01



ಕೆಂಪು ಕಿಬ್ಬೊಟ್ಟೆಯ ಪಿಕಳಾರ ಮರಿಗಳು; ದಿನ 06



ಕೆಂಪು ಕಿಬ್ಬೊಟ್ಟೆಯ ಪಿಕಳಾರ ಮರಿಗಳು; ದಿನ 11; ಗೂಡು ಬಿಡಲು ಸಿದ್ಧವಾಗಿವೆ



**ಗುಳುಮುಳುಕ ಮರಿಗಳು (Dabchick or Little Grebe chicks)**



ಗುಳುಮುಳುಕ ಮರಿ (ಸ್ವಲ್ಪ ದೊಡ್ಡದು)



ಕೆಂಪು ಟಿಟ್ಟಿಭ ಮರಿ (Redwattled Lapwing chick); ದಿನ 01



ಕೆಂಪು ಟಿಟ್ಟಿಭ ಮರಿ (ದೊಡ್ಡದು)



## ಇತರ ಶೀರ್ಷಿಕೆಗಳು

ಒಳ್ಳೆಯ ಕೆಲಸ

ಅನುಕೂಲದ ಆಶ್ರಯ

ಆ ನಿಗೂಢ ಮೊಟ್ಟೆಗಳು

ಎಲ್ಲಿದ್ದೀಯಪ್ಪಾ ಕಾಪರ್‌ಸ್ಮಿತ್!

Vidya Online

A PARTNERSHIP FOR TEACHERS, CHILDREN AND EDUCATION

Visit http://vidyaonline.net for more titles